ಒಂದಾಣೆಮಾಲೆಯ ೧೩ನೆಯ ಪುಷ್ಪ.

# ಪೋಸ್ಟಮಾಸ್ತರ.



ಬರಹಗಾರರು 'ರಾಮಕೃಷ್ಣ'

ನವಂಬರ ೧೯೩೨.



ಪುಷ್ಪ ೬

ವಾ. ಕ್ರಂ, ೧—೬— ೦ ಅ. ವೆ. ಸೇರಿ.

## ಮಹನೀಯರೇ ಇತ್ತ ಕಡೆಗೆ ಲಕ್ಷ್ಯ ಕೊಡಿರಿ.



ಕಿರ್ಲೋಸ್ಕರ ಕಬ್ಬಿಣ ಖುರ್ಚಿ ಮುಂತಾದ ಫರ್ನಿಚರಗಳು ತಾಳಿಕೆಯಲ್ಲಿ ಬಲುಗಟ್ಟಿ, ಬೆಲೆಯಲ್ಲಿ ಕಡಿಮೆ.

ಇವುಗಳಲ್ಲಿ ಸಾದಾ ಖುರ್ಚಿ, ಮಡಿಕೆ ಖುರ್ಚಿಗಳೆಂದು ಎರಡು ಪ್ರಕಾರಗಳಿವೆ. ಹೆಚ್ಚಿನ ಮಾಹಿತಿ ಬಗ್ಗೆ ಈ ಹೊತ್ತೇ ಬರೆಯಿರಿ.

**ಕಿರ್ಲೋಸ್ಕರ ಬಂಧುಗಳು ಲಿಮಿಟೆಡ್**
**ಕಿರ್ಲೋಸ್ಕರವಾಡಿ,** (ಜಿ. ಸಾತಾರಾ,)

---

## ಮಹಾತ್ಮಾ ಗಾಂಧಿಯವರ ಆಜ್ಞೆ.

## ದೇಶೀ ಕಂಪನಿಯಲ್ಲಿಯೇ

# ವಿಮೆ ಇಳಿಸಿರಿ.

ನಮ್ಮ ಕಂಪನಿಯಲ್ಲಿ ಎಲ್ಲ ಕಂಪನಿಗಳಿಗಿಂತ ದರಗಳು ಕಡಿಮೆ. ಸ್ತ್ರೀಯರ ವಿಮೆ ಇಳಿಸಲ್ಪಡುವದು. ಕಂತು ತಪ್ಪಿದರೆ ಒಮ್ಮೆಲೆ ಪಾಲಿಸಿ ರದ್ದಾಗುವದಿಲ್ಲ ಸಾಲಸಿಕ್ಕುವದು. ಇವೇ ಹೆಚ್ಚಿನ ಸವಲತ್ತುಗಳಿವೆ. ಏಜಂಟರು ಬೇಕು.

ದಿ. ಏಶಿಯಾಟಿಕ ಗವ್ಹರ್ನಮೆಂಟ ಸಿಕ್ಯುರಿಟಿ ಲಾಯಿಫ ಇನ್ಶ್ಯೂರನ್ಸ ಕಂಪನಿಯ ಕರ್ನಾಟಕ ಚೀಫ್ ಏಜಂಟರು--**ದೇಶಪಾಂಡೆ ಆತ್ತಾರ ಆ್ಯಂಡ ಕಂ. ಹುಕ್ಕೇರಿ ಜಿ ಬೆಳಗಾವಿ.**

---

**ಸೂಚನೆ:**—ಜಾಹೀರಾತುಗಾರರಿಗೆ ಬರೆಯುವಾಗ '**ಬಂದಾಣೆ ಮಾಲೆ**' ಯ ಹೆಸರು ಕಾಣಿಸಿರಿ.

# ಪೋಸ್ಟ ಮಾಸ್ತರ.



ಬರಹಗಾರ:— "ರಾಮು"

ಉಲಾಪೂರವೆಂಬದೊಂದು ಚಿಕ್ಕ ಹಳ್ಳಿ. ಆ ಹಳ್ಳಿಯಲ್ಲಿ ಆಂಗ್ಲೇಯನೊಬ್ಬನು ನೀಲಿಯ ಕಾರಖಾನೆಯನ್ನು ತೆಗೆದಿದ್ದನು. ಅದು ಚಿಕ್ಕ ಹಳ್ಳಿಯಾದರೂ ಕೇವಲ ಆಂಗ್ಲೇಯನನ ಕಾರಖಾನೆಯೊಂದು ಆತನ ಸೌಕರ್ಯಕ್ಕಾಗಿ ಸರಕಾರದವರು ಅಲ್ಲೊಂದು ಪೋಸ್ಟಾಫೀಸು ಸ್ಥಾಪಿಸಿದ್ದರು. ಆ ಪೋಸ್ಟಾಫಿಸು ಚಿಕ್ಕದೊಂದು ಕೊಳದ ದಂಡೆಯ ಮೇಲಿತ್ತು. ಅದರ ಸುತ್ತುಮುತ್ತಲು ಹಚ್ಚನ್ನ ಹುಲ್ಲೂ ನಾನಾಜಾತಿಯ ಗಿಡಗಂಟಿಗಳೂ ನಾಟಿಕೊಂಡಿದ್ದರಿಂದ ನೋಡುವವರಿಗೆ ಆ ಸ್ಥಳವು ಒಳ್ಳೇ ರಮಣೀಯವಾಗಿ ತೋರುತ್ತಲಿತ್ತು. ಆ ಪೋಸ್ಟಾಫೀಸಿನಲ್ಲಿಯೇ ಮಾಸ್ತರನೂ ಇರುತ್ತಿದ್ದನು. ಕಲಕತ್ತೆಯು ಆ ಮಾಸ್ತರನ ಊರು.

ಆ ನೀಲಿಯ ಕಾರಖಾನೆಯಲ್ಲಿಯ ಕೂಲಿಕಾರರಿಗೆ ಮೈಮೂರಿ ಕೆಲಸ. ತುಸುವಾದರೂ ಬಿಡುವಿರುತ್ತಿದ್ದಿಲ್ಲ. ಅಂತಹ ಜನರೊಡನೆ ಸಮರಸವಾಗಿ ನಡೆದುಕೊಳ್ಳುವ ಕಲೆಯು ಆ ಮಾಸ್ತರನಿಗೆ ಅವಗತವಿದ್ದಿಲ್ಲ. ಆದಕಾರಣ ಆ ಜನರೊಡನೆ ನಡೆನುಡಿಗಳಲ್ಲಿ ಮಾಸ್ತರನು ಬಲು ಅಸ್ಪೃತೆಯಿಂದಲೇ ವರ್ತಿಸುತ್ತಿದ್ದನು.

ಪೋಸ್ಟಮಾಸ್ತರನಿಗೆ ಗೆಳೆಯರಾಗಲಿ, ಬಂಧುಬಳಗದವರಾಗಲಿ ಯಾರೂ ಇದ್ದಿಲ್ಲ. ಮಾಸ್ತರನಿಗೆ ಸಂಬಳವಾದರೂ ಅಷ್ಟಕ್ಕಷ್ಟೇ ಇತ್ತು. ಅವನು ತನ್ನ ಅಡಿಗೆಯನ್ನು ತಾನೇ ಮಾಡಿಕೊಂಡು ಸುಶೀಲಿನೊಡನೆ ತಿನ್ನುತ್ತಿದ್ದನು.

ಸುಶೀಲೆಯು ಅದೇ ಹಳ್ಳಿಯಲ್ಲಿರುವ ಒಬ್ಬ ಅನಾಥ ಬಾಲಿಕೆ. ಅವಳು ಪೋಸ್ಟಮಾಸ್ತರನ ಮನೆಯ ಕಿರುಕಳ ಕೆಲಸ ಮಾಡುತ್ತ ಅಲ್ಲಿಯೇ ಇದ್ದಳು. ದಿನಾಲು ಸಂಜೆಯಾಗುತ್ತಲೆ ಮಾಸ್ತರನು ದೀಪಹಚ್ಚಿ ಸುಶೀಲೆಯನ್ನು ಕೂಗುತ್ತಲಿದ್ದ "ಸುಶೀಲೆ!"

ಸುಶೀಲೆಯು ಚಾತಕಪಕ್ಷಿಯಂತೆ ಮಾಸ್ತರನು ಕೂಗುವ ದಾರಿಯನ್ನೇ ಕಾಯುತ್ತ ಹೊರಕಟ್ಟೆಯ ಮೇಲೆಯೇ ಕೂತಿರುತ್ತಿದ್ದಳು. ಮಾಸ್ತರನು ಕೂಗಿದೊಡನೆ ಒಮ್ಮೆಲೆ ಒಳಗೆ ಹೋಗದೆ ಬಾಗಿಲದೊಳಗಿಂದಲೇ—"ಅಣ್ಣಾ! ನೀವು ನನ್ನನ್ನು ಕೂಗಿದಿರಾ" ಎಂದು ಕೇಳುತ್ತಿದ್ದಳು.

"ಹೌದು ನೀನೇನು ಮಾಡುತ್ತಿದ್ದೆ?" ಎಂದು ಮಾಸ್ತರನು ಕೇಳುತ್ತಿದ್ದನು. ಅದಕ್ಕೆ ಬಹುತರವಾಗಿ ಅವಳು "ಅಪ್ಪಯ್ಯಾ ಇದೇನು ತಡವಾಯಿತಲ್ಲಾ! ಬೇಗನೇ ಒಲೆಹೊತ್ತಿಸುವೆನೆಂದವಳೇ ಹೊರಡುವಳು. ಆ ಮೇಲೆ ಪೋಸ್ಟಮಾಸ್ತರನು—"ಸ್ವಲ್ಪು ತಡೆ, ಮೊದಲು ನನ್ನ ಚಿಲಿಮೆ ಹೊತ್ತಿಸಿ ಕೊಡು; ಆಮೇಲೆ ಒಲೆ ಹೊತ್ತಿಸುವಿಯಂತೆ!" ಎನ್ನುವನು. ಸುಶೀಲೆಯು ಚಿಲುಮೆ ಹೊತ್ತಿಸಿ ತಂದಿಡುತ್ತಿದ್ದಳು. ಅವಳು ಒಳಗೆಹೋಗಿ ಚಿಲುಮೆ ಹೊತ್ತಿಸುವಷ್ಟುಕಾಲ ಅವಳೊಡನೆ ಮಾತನಾಡಲು ಮಾಸ್ತರನಿಗೆ ಸಂಧಿ ದೊರಕುತ್ತಿದ್ದಿತು. ಮತ್ತು ಅವಳಿಗೆ "ಏನೇ ಸುಶಿಲೆ! ನಿನಗೆ ನಿಮ್ಮವ್ವನ ನೆನಪಾಗುವದೇ?"ಎಂದು ಕೇಳುವನು.

ಸುಶೀಲೆಯನ್ನು ಮಾತಾಡಿಸಲು ಮಾಸ್ತರನಿಗೆ ಇದೊಂದು ಒಳ್ಳೇ ವಿಷಯ. ಆಕೆಗೆ ತಮ್ಮವ್ವನ ನೆನಪು ವಿಶೇಷವಾಗುತ್ತಿದ್ದಿಲ್ಲ. ಆದರೆ ತನ್ನ ಮೇಲೆ ಮಮತೆ ಮಾಡುತ್ತಿದ್ದ ತಂದೆಯ ನೆನಪು ಮಾತ್ರ ಆಗುತ್ತಿತ್ತು. ಮತ್ತು ತನಗೆ ಒಬ್ಬ ತಮ್ಮನಿದ್ದದ್ದು, ತಾನು ಅತನೊಡನೆ ಹಚ್ಚನ್ನ ಹುಲ್ಲು ಬೆಳೆದ ಕೊಳದಲ್ಲಿ ಮೀನ ಹಿಡಿದು ಆಟವಾಡುತ್ತಿದ್ದುದು, ಅಲ್ಲದೆ ಇನ್ನೂ ಅನೇಕ ಬಗೆಯ ನೆನಪುಗಳೂ ಅವಳಿಗೆ ನೆನಪಾಗುತ್ತಿದ್ದುವು. "ಆದರೆ ಅವ್ವನ ನೆನಪು ಮಾತ್ರ ಕಿಂಚಿತ್ತಾದರೂ ಆಗುತ್ತಿದ್ದಿಲ್ಲ.

ಇಷ್ಟು ಮಾತು ಕತೆಗಳಾಗುವದರೊಳಗೆ ಹೊತ್ತೇ ಆಗುತ್ತಿತ್ತು. ಆಮೇಲೆ ಕೈಲೆ ಅಡಿಗೆ ಮಾಡುವದೆಂದರೆ ಮಾಸ್ತರನಿಗೆ ಬೇಸರಿಕೆ ಬರುತ್ತಿತ್ತು. ಇದು ತಿಳಿದೊಡನೆ ಸುಶೀಲೆಯು ಸಾವರಿಸಿಕೊಂಡೆದ್ದು ಲಗುಬಗೆಯಿಂದ ಒಲೆ ಹೊತ್ತಿಸಿ ತನಗೆ ಬಂದಂತೆ ರೊಟ್ಟಿಯನ್ನು ಬಡೆದು ಬೆಳಗಿನಲ್ಲಿ ಮಾಡಿ ಉಳಿದ ಹುಳಿ ಪಲ್ಲೆಯೊಡನೆ ತಾನೂ ಅಣ್ಣನೊಡನೆ ಊಟವನ್ನು ಮಾಡುತ್ತಿದ್ದಳು.

—೨—

ಬಿಡುವಿದ್ದಾಗೆಲ್ಲ ಮಾಸ್ತರನು ಸಾಯಂಕಾಲದಲ್ಲಿ ತನ್ನ ಡೆಸ್ಕಿನ ಹತ್ತರ ಹೋಗಿ ಕುಳಿತುಕೊಳ್ಳುವನು. ಆಗ ತಮ್ಮ ಅವ್ವನ, ಹಾಗೂ ತಂಗಿಯ ನೆನಪಾಗುತ್ತಿತ್ತು. ಅದರಿಂದ ಆತನ ಮನಸ್ಸಿಗೆ ಬಹಳೇ ಹುರಹುರವಾಗುತ್ತಿತ್ತು. ಆದರೆ ಆತನು ಕಾರಖಾನೆಯಲ್ಲಿಯ ಕೂಲಿಯವರ ಮುಂದಾಗಲಿ, ಗೆಳೆಯರ ಮುಂದಾಗಲಿ ಆ ವಿಷಯಕ್ಕೆ ಎಂದೂ ಮಾತೆತ್ತುತಿದ್ದಿಲ್ಲ. ಆದರೆ ಅನಾಥ ಬಾಲಿಕೆಯಾದ ಸುಶೀಲೆಯೊಡನೆ ಮಾತ್ರ ಆ ನೆನಪು ತೆಗೆದು ಅನೇಕ ಕಾಲದ ವರೆಗೆ ಮಾತಾಡುತ್ತ ಕೂಡ್ರುತಿದ್ದ. ಆದರಿಂದ ಇದೆಲ್ಲ ಆ ಚಿಕ್ಕ ಬಾಲಿಕೆಯಾದ ಸುಶೀಲೆಯ ಮನದ ಮೇಲೆ ಪರಿಣಾಮವಾಗಿ ಅವಳು, ತನ್ನ ತಂದೆಯೇ ಆತನ ತಂದೆ ತನ್ನ ತಾಯಿಯೇ ಆತನ ತಾಯಿಯೆಂತಲೂ, ಆತನ ಬಂಧುಬಳಗವೇ ತನ್ನ ಬಂಧುಬಳಗವೆಂತಲೂ ತಿಳಿಯಲಾರಂಭಿಸಿದಳು.

ಇಳಿಹೊತ್ತಿನ ಸಮಯ. ಮಳೆಯು ಆದೇ ನಿಂತಿತ್ತು ತಂಗಾಳಿಯು ಮಂದಮಂದವಾಗಿ ಬೀಸುತ್ತಿತ್ತು. ಗಿಡಗಳ ಮೇಲಿನ ಪಕ್ಷಿಗಳು ಕಿಲಿಬಿಲೆಂದು ನುಡಿಯುತ್ತಿದ್ದವು. ಅಂಥ ವೇಳೆಯಲ್ಲಿ ಮಳೆಯ ಹೊಡತದಿಂದ ನಿರ್ಮಲವಾದ ಗಿಡಗಳ ಎಲೆಗಳ ಕಡೆಗೂ, ನೀಲಾಕಾಶದೊಳಗೆ ಮೆಲ್ಲಮೆಲ್ಲನೆ ಕಲೆಯುತ್ತಲಿದ್ದ ಮೋಡಗಳ ಕಡೆಗೂ ತನ್ನ ದೃಷ್ಟಿಯನ್ನಿಟ್ಟು ವಿರಾಮ ಖುರ್ಚಿಯ ಮೇಲೆ ಹೊರಾಂಗಣದಲ್ಲಿ ಕುಳಿತಿದ್ದ ಆ ಮಾಸ್ತರನು.

ಆಗ ಮಾಸ್ತರನು—“ಅಹಹ! ಇಂತಹ ಕಾಲಕ್ಕೆ ನನ್ನ ಮೇಲೆ ಪ್ರೀತಿ ಮಾಡುವವರು ಒಬ್ಬರಾದರೂ ಇದ್ದರೆ ಎಷ್ಟೊಂದು ಒಳೆ

ತಾಗುತಿತ್ತಲ್ಲ!" ಎಂದು ಉಸುರುಗರೆದು ಮುಗುಳು ನಗೆಯಿಂದ "ಸುಶೀಲೆ!" ಎಂದು ಕೂಗಿದನು.

ಆಗ ಸುಶೀಲೆಯು ಪೇರಲ ಗಿಡದಡಿಯಲ್ಲಿ ಪೇರಲಕಾಯಿ ಹರಿದು ತಿನ್ನುತ್ತ ನಿಂತಿದ್ದಳು ತನ್ನಣ್ಣನ ಕೂಗು ಕೇಳಿ ಸುಶೀಲೆಯು ಲಗುಬಗೆ ಯಿಂದ ಓಡಿಬಂದು "ನನ್ನನ್ನೇಕೆ ಕೂಗಿದೆ ಅಣ್ಣಾ?"

"ಹೌದು, ಸುಶಿಲೇ ನಿನಗೆ ಓದುಬರಹ ಕಲಿಸಬೇಕೆಂದಿದ್ದೇನೆ." ಮಾಸ್ತರನು ಅಂದಿನಿಂದ ದಿನಾಲು ಉಳಿದ ವೇಳೆಯಲ್ಲಿ ಆವಳಿಗೆ ಓದು ಬರಹ ಕಲಿಸಲಾರಂಭಿಸಿದನು. ತುಸುದಿನಗಳಲ್ಲಿಯೇ ಆಕೆಗೆ ಓದುವದಕ್ಕೂ ಬರೆಯುವದಕ್ಕೂ ಬರಹತ್ತಿತು.

ಒಂದುದಿನ ಸಂಜೆಯ ಸಮಯ. ಮುಗಿಲೆಲ್ಲ ಕಪ್ಪಾದ ಮೋಡ ಗಳಿಂದ ತುಂಬಿ ಹೋಗಿದೆ. ಸುಶೀಲೆಯು ನಿತ್ಯದಂತೆ ಅಣ್ಣನು ಕೂಗಬಹುದೆಂದು ದಾರೀನೋಡುತ್ತ ಹೊರಕಟ್ಟೆಯ ಮೇಲೆ ನಿಂತಿದ್ದಳು. ಆದರೆ ಈ ದಿನ ಅಣ್ಣನು ಪ್ರತಿನಿತ್ಯದಂತೆ ತನ್ನನ್ನು ಕೂಗುವ ವೇಳೆ ಯಾಗಿ ಹೋದರೂ ಆತನ ಕೂಗಿನ ಸುಳಿವೇ ಇಲ್ಲದ್ದರಿಂದ ವಿಚಾರಕ್ಕೊ ಳಗಾದಳು. ಎಷ್ಟು ವಿಚಾರ ಮಾಡಿದರೂ ಮನಸಿಗೆ ಸಮಾಧಾನವಾಗ ಲಿಲ್ಲ. ಆದರೂ ಎಷ್ಟೋ ಹೊತ್ತಿನವರೆಗೆ ಹಾಗೇ ನಿಂತು ವಿಚಾರ ಮಾಡಿ ದಳು. ಆದರೆ ವಿಚಾರಕ್ಕೆ ಏನೂ ತೋಚದ್ದರಿಂದ ಒಳಗೆ ಹೋಗಿ ನೋಡಿ ಬರಬೇಕೆಂಬುವ ಲವಲವಿಕೆಯಿಂದ ಒಳಗೆ ಹೋದಳು. ಅಣ್ಣನು ಮಲಗಿ ನಿದ್ದೆ ಮಾಡುತಿದ್ದುದು ಕಂಡು ಯಾಕೆ ಎಚ್ಚರಿಸಬೇಕೆಂದು ಹಿಂದಿರುಗಿ ಹೊರಟಿದ್ದಳು; ಅಷ್ಟರಲ್ಲಿ ಮಾಸ್ತರನು 'ಸುಶಿಲೇ' ಎಂದು ಕೂಗಿದನು. ಕೂಡಲೆ ಹಿಂದಿರುಗಿ— "ನಿದ್ದೆ ಹತ್ತಿರುವದೇ" ಎಂದು ಕೇಳಿದಳು.

"ಸುಶಿಲೇ" ಈ ದಿನ ನನ್ನ ಮೈ ಬೆಚ್ಚಗಾಗಿದೆ. ಜ್ವರ ಬಂದಿರು ವನ್ತೋ ಏನೋ ಕೈ ಹಚ್ಚಿ ನೋಡು! ಎಂದನು.

ಸುಶೀಲೆಯು ಮೈಗೆ ಕೈ ಹಚ್ಚಿ ನೋಡಿದಳು. ಮೈ ಕಾಯ್ದು ಕೆಂಡ ದಂತಾಗಿತ್ತು. ಒಡನೆಯೇ ಔಷಧೋಪಚಾರಕ್ಕಾಗಿ ಆದೇ ಹಳ್ಳಿಯ ಡಾಕ್ಟರನನ್ನು ಕರೆತಂದು ತೋರಿಸಿದಳು. ಔಷಧವನ್ನು ತಾನೇ

ಕೆಂದು ತನ್ನ ಕೈಯಿಂದಲೇ ವೇಳೆ ವೇಳೆಗೆ ಕೊಟ್ಟು ಹಗಲು ರಾತ್ರಿಯೆನ್ನದೆ ಬೆಳತನಕ ಹತ್ತರ ಕುಳಿತು ಜಾಗರಣೆಮಾಡಿ ಚನ್ನಾಗಿ ಮಾಸ್ತರನ ಆರೈಕೆ ಮಾಡಿದಳು. ಆದರಿಂದ ಮಾಸ್ತರನಿಗೆ ಬೇಗ ವಾಸಿಯಾಗ ಲಾರಂಭಿಸಿತು. ಆದರೆ, ಅವನಿಗೆ ಅಲ್ಲಿಯ ಹವೆಯು ತಡೆಯದಾಯಿತು. ಆದರಿಂದ ಅವನು ಹವೆ ಬದಲಿಸಲು ಬೇರೂರಿಗೆ ತನಗೆ ವರ್ಗಾಗ ಬೇಕೆಂದು ವರಿಷ್ಠರಿಗೆ ಅರ್ಜಿಮಾಡಿಕೊಂಡಿದ್ದನು.

ಮಾಸ್ತರನ ಬೇನೆಯು ಗುಣವಾಗುತ್ತ ನಡೆದಿದ್ದರಿಂದ ಸುಶೀಲೆಯು ಮತ್ತೆ ಮೊದಲಿನಂತೆಯೇ ಹೊರಕಟ್ಟೆಯ ಮೇಲೆ ಅಣ್ಣನ ಕೂಗಿನ ದಾರೀಕಾಯುತ್ತ ಕೂಡ್ರಲಾರಂಭಿಸಿದಳು. ಆದರೆ ಆಕೆಯ ಅಣ್ಣನಾದ ಪೋಸ್ಟಮಾಸ್ತರನು ವರಿಷ್ಟರ ಕಡೆಗೆ ಕಳಿಸಿದ ಅರ್ಜಿಯ ಉತ್ತರದ ದಾರೀ ನೋಡುತ್ತಲಿದ್ದ.

ಇದರಂತೆ ಎಂಟು ದಿನಗಳು ಗತಿಸಿದವು. ಒಂದು ದಿನ ಪೋಸ ಮಾಸ್ತರನು "ಸುಶೀಲೆ!" ಎಂದು ಕರೆದ ಕೂಗು ಕೇಳಿ ಆಕೆಗೆ ಹಿಡಿಸ ಲಾರದಷ್ಟು ಆನಂದವಾಗಿ ಒಮ್ಮೆಲೆ ಓಡಿಬಂದು—"ಯಾಕೆ ನೀವು ನನ್ನನ್ನು ಕರೆದಿರಾ? ಎಂದು ಕೇಳಿದಳು.

"ಸುಶೀಲೆ ನಾನು ನಾಳೆ ಹೋಗುತ್ತೇನೆ.........

"ಅಂಣಾ! ಎಲ್ಲಿಗೆ?" ಎಂದು ಮಧ್ಯದಲ್ಲಿಯೇ ಕೇಳಿದಳು.

"ಮನೆಗೆ.......?"

"ತಿರುಗಿ ಎಂದು ಬರುವಿರಿ?"

"ಛೀ ಹುಚ್ಚೀ ನಾನಿನ್ನು ತಿರುಗಿ ಬರುವದಿಲ್ಲ!"

ಆಮೇಲೆ ಸುಶೀಲೆಯು ಏನೂ ಮಾತಾಡಲಿಲ್ಲ.

ಮಾಸ್ತರ—"ನನ್ನ ಅರ್ಜಿಯು ನಾಮಂಜೂರಾಯಿತು!—ಕಿತ್ತೊಗೆಯಲ್ಪಟ್ಟಿತು—ಅದು ಕಾರಣ ನಾನು ನನ್ನ ಕೆಲಸಕ್ಕೆ ರಾಜೀನಾಮೆ ಕೊಟ್ಟು ನಾಳಿನ ದಿನವೇ ನಮ್ಮೂರಿಗೆ ಹೋಗುವವನಿದ್ದೇನೆ." ಎಂದನು.

ಕೆಲವು ವೇಳೆ ಇಬ್ಬರೂ ಮಾತನಾಡಲಿಲ್ಲ. ಆದರಿಂದ ಕೋಣೆಯಲ್ಲಿ ಶಾಂತತೆಯುಂಟಾಗಿತ್ತು. ದೀಪವು ಮಾತ್ರ ಮಿಣಿ ಮಿಣಿಯಾಗಿ ಉ

ಆದರೆ ಪೋಸ್ಟಮಾಸ್ತರನ ಮನಸಿಗೆ ಮಾತ್ರ ಸ್ವಾಸ್ಥ್ಯವಿದ್ದಿಲ್ಲ. ಆತನಿಗೆ ಹಳಹಳಿಯಾಗಹತ್ತಿತು. ಆದ್ದರಿಂದ ಒಮ್ಮೆ ತಿರುಗಿ ಹೋಗಿ ಸುಶೀಲೆಯನ್ನು ಕರಕೊಂಡು ಬರಬೇಕೆಂದೆನಿಸಿತು ಆತನಿಗೆ. ಆದರೆ ಬೋಟು ವೇಗದಿಂದ ನಡೆದಿತ್ತು.

ಮಾಸ್ತರನು ಖಿನ್ನಮನಸ್ಕನಾಗಿ ವಿಚಾರಮಾಡತೊಡಗಿದ. ಆದರೆ ಮಧ್ಯದಲ್ಲಿಯೇ ಒಬ್ಬ ಕವಿಯ ತತ್ವಜ್ಞಾನದ ವಿಷಯಕ್ಕಿದ್ದ ಸುಭಾಷಿತವು ಅವನಿಗೆ ನೆನಪಾಯಿತು. ಅದೇನಂದರೆ—

ಯಥಾಕಾಷ್ಠಂಚ ಕಾಷ್ಠಂಚ ಸಮೇಯಾತಾಂ ಮಹೋದಧೌ ||
ಸಮೇತ್ಯಚ ವ್ಯಪೇಯಾತಾಂ ತದ್ವದ್ ಭೂತಸಮಾಗಮಃ ||

**ಸಾರಾಂಶ**:—ಸಾಗರದೊಳಗಿನ ರಭಸದ ತೆರೆಗಳ ಹೊಡೆತಕ್ಕೆ ಎರಡು ಕಟ್ಟಿಗೆಯ ತುಂಡುಗಳು ಹೇಗೆ ಒಂದಾಗಿ ಮತ್ತೆ ಅಗಲುವವೋ ಹಾಗೆ ಮನುಷ್ಯರೂ ಕೆಲವೊಂದು ಪ್ರಸಂಗದಲ್ಲಿ ಒಬ್ಬರಿಗೊಬ್ಬರು ಮಿಲಿತರಾಗಿ ಮತ್ತೆ ಅಗಲುವರು:—ಆದ್ದರಿಂದ ನಾನೂ ಅವಳ ವಿಯೋಗಕ್ಕಾಗಿ ದುಃಖಪಡಬಾರದು. ಹೀಗೆಂದು ಮಾಸ್ತರನು ತನ್ನ ಮನಸಿನ ಸಮಾಧಾನ ಮಾಡಿಕೊಂಡನು.

ಆದರೆ ಏನೂ ಅರಿಯದ ಆ ಬಾಲಿಕೆಗೆ-ಸುಶೀಲೆಗೆ—ತತ್ವಜ್ಞಾನದ ಗಂಧವೂ ಕೂಡವಿದ್ದಿರಲಿಲ್ಲವಾದುದರಿಂದ ಶೋಕಾಗ್ರಸ್ತಳಾದ ಅವಳು ತನ್ನ ಮನಸನ್ನು ಸಮಾಧಾನಪಡಿಸಲು ಅಶಕ್ತಳಾದಳು. ಆದ್ದರಿಂದ ತನ್ನ ಅಣ್ಣ-ಪೋಸ್ಟಮಾಸ್ತರನು ಇನ್ನೂ ತಿರುಗಿ ಬಂದು ತನಗೆ ಭೆಟ್ಟಿಯಾಗಬಹುದು ಕರೆದುಕೊಂಡು ಹೋಗಬಹುದು ಎಂಬ ಭ್ರಾಮಕ ಕಲ್ಪನೆಯು ಅವಳನ್ನು ಬಿಟ್ಟಿರಲಿಲ್ಲ. ಅಂತೇ ಅವಳು ಅಲ್ಲಿಂದ-ಆ ಹಳ್ಳಿಯಿಂದ-ಬೇರೆ ಕಡೆಗೆ ಹೋಗಲಾರದೆ ಆ ಪೋಸ್ಟಾಫಿಸಿನ ನೆರೆಯಲ್ಲಿಯೇ ಮೇಲಿಂದ ಮೇಲೆ ಸುತ್ತುವರಿಯುತ್ತಿದ್ದಳು.

ಮನುಷ್ಯನ ಜೀವವು ಎಷ್ಟು ಹುಚ್ಚಿರುವದು !

( ಇದು ಕವಿಶ್ರೇಷ್ಠ ಟಾಗೋರರವರ The Postmaster ಎಂಬ ಕತೆಯ ಅನುವಾದ. )

---

# ಕಾಲಗತಿ.



ಸರ್ವಗ್ರಾಮದಲ್ಲಿ ಇಂದು ಒಳ್ಳೇ ಉತ್ಸಾಹ! ಬೀದಿ ಬೀದಿಗಳಲ್ಲಿ ನಿರ್ಮಿಸಿದ ಮಂಡಪಗಳು, ಎತ್ತ ನೋಡಿದತ್ತ ಗುಡಿತೋರಣಗಳು, ಚಿತ್ರವಿಚಿತ್ರ ಬಣ್ಣದ ಕಾಗದಗಳಲ್ಲಿ ಬಲು ಜಾಣತನದಿಂದ ಕತ್ತರಿಸಿ ಗೆಯ್ದ ಹೂಮಾಲೆಗಳು, ಬಹು ಮನೋಹರವಾಗಿ ಶೋಭಿಸುತ್ತಿರುವವು. ರಾಜಕರ್ಮಚಾರಿಗಳ ಓಡಾಟ! ಆಳುಗಳ ಪೀಕಲಾಟ! ಪ್ರೇಕ್ಷಕರ ಕಲಕಲಾಟ! ಮೋಟಾರುಕಾರುಗಳ ಅಲೆದಾಟ! ಇವೇ ಮೊದಲಾದವುಗಳಿಂದ ಸರ್ವಗ್ರಾಮದ ಮುಖ್ಯ ಬೀದಿಗಳೆಲ್ಲ ಕಿಕ್ಕಿರಿದು ಹೋಗಿವೆ. ಅಲ್ಲಿಯ ಸ್ಥಾನಿಕ ಸ್ವರಾಜ್ಯದ ಆಡಳಿತೆಗಾರರಲ್ಲಿ ಹಿಂದೆ ಎಂದೂ ಇಲ್ಲದ ಚಟುವಟಿಕೆಯು ಇಂದು ಮೂರ್ತಿಗೊಂಡು ಕಾಣುತ್ತಿದೆ. ಬೀದಿಗಳಲ್ಲಿ ಎಷ್ಟೋ ದಿನಗಳಿಂದ ಕೂಡಿ ಬಿದ್ದ ಕಸ-ಕಾಜು-ಚೂರು-ಮಲ-ಮೊದಲಾದವುಗಳನ್ನು ಬಳಿಯುವದು, ಬೀದಿಗಳ ಅಕ್ಕಪಕ್ಕಗಳಲ್ಲಿ ಅವ್ಯವಸ್ಥಿತವಾಗಿ ಬೆಳೆದ ಹುಲ್ಲು-ಕರಿಕೆಗಳನ್ನು ಕೆತ್ತಿತೆಗೆಯುವದು ಕಾಲುವೆಗಳಲ್ಲಿ ಬಹು ಕಾಲ ಮಲೆತು ನಿಂತು, ಕೊಳೆತು ಅಸಹ್ಯವಾಗಿ ನಾರುತ್ತಿದ್ದ, ಗುಂಡಾವುಗಳಿಗೆ ತವರು ಮನೆಯಾಗಿ ಮಲೇರಿಯಾ ರೋಗಕ್ಕೆ ಪ್ರಿಯಪಾತ್ರವೆನಿಸಿದ ಕೊಳೆನೀರನ್ನು ತುಂಬಿ ಹೊರಚಲ್ಲುವದು, ಇವೇ ಮುಂತಾದ ಕಾರ್ಯ ಕಲಾಪಗಳು ಬಲು ಎಚ್ಚರದಿಂದಲೂ, ಲಗುಬಗೆಯಿಂದಲೂ ನಡೆದಿದ್ದವು.

ಓದುಗರೆ, ಇದೆಲ್ಲ ಸಮಾರಂಭ ಏಕೆಂಬುದು ನಿಮಗೆ ಗೊತ್ತಿದೆಯೇ? "ಇಲ್ಲ" ವೆನ್ನುವಿರಾ? ಹಾಗಾದರೆ ನಮ್ಮೊಡನೆ ಬನ್ನಿರಿ! ಏನೆನ್ನುವಿರಿ? "ಎದುರಿಗಿನ ಗೋಡೆಗೆ ಅದೇನೊ ದೊಡ್ಡ ಕಾಗದ ಅಂಟಿಸಿರುವರೆಂದು?" ಹಾಗಾದರೆ ಅಲ್ಲಿಗೆ ಹೋಗಬೇಡಿರಿ. ಏಕೆಂದರೆ ಇದು ನೋಡಿ; ಇದೀಗ ದೇಶದಲ್ಲೆಲ್ಲ ನಡೆದಿರುವದು ಸ್ವಾತಂತ್ರ್ಯ

ಆದರೆ ಪೋಸ್ಟಮಾಸ್ತರನ ಮನಸಿಗೆ ಮಾತ್ರ ಸ್ವಾಸ್ಥ್ಯವಿದ್ದಿಲ್ಲ. ಆತನಿಗೆ ಹಳಹಳಿಯಾಗಹತ್ತಿತು. ಅದ್ದರಿಂದ ಒಮ್ಮೆ ತಿರುಗಿ ಹೋಗಿ ಸುಶೀಲೆಯನ್ನು ಕರಕೊಂಡು ಬರಬೇಕೆಂದೆನಿಸಿತು ಆತನಿಗೆ. ಆದರೆ ಬೋಟು ವೇಗದಿಂದ ನಡೆದಿತ್ತು.

ಮಾಸ್ತರನು ಖಿನ್ನಮನಸ್ಕನಾಗಿ ವಿಚಾರಮಾಡತೊಡಗಿದ. ಆದರೆ ಮಧ್ಯದಲ್ಲಿಯೇ ಒಬ್ಬ ಕವಿಯ ತತ್ವಜ್ಞಾನದ ವಿಷಯಕ್ಕಿದ್ದ ಸುಭಾಷಿತವು ಅವನಿಗೆ ನೆನಪಾಯಿತು. ಅದೇನಂದರೆ—

ಯಥಾಕಾಷ್ಠಂಚ ಕಾಷ್ಠಂಚ ಸಮೇಯಾತಾಂ ಮಹೋದಧೌ ||
ಸಮೇತ್ಯಚ ವ್ಯಪೇಯಾತಾಂ ತದ್ವದ್ ಭೂತಸಮಾಗಮಃ ||

**ಸಾರಾಂಶ**:—ಸಾಗರದೊಳಗಿನ ರಭಸದ ತೆರೆಗಳ ಹೊಡೆತಕ್ಕೆ ಎರಡು ಕಟ್ಟಿಗೆಯ ತುಂಡುಗಳು ಹೇಗೆ ಒಂದಾಗಿ ಮತ್ತೆ ಅಗಲುವವೋ ಹಾಗೆ ಮನುಷ್ಯರೂ ಕೆಲವೊಂದು ಪ್ರಸಂಗದಲ್ಲಿ ಒಬ್ಬರಿಗೊಬ್ಬರು ಮಿಲಿತರಾಗಿ ಮತ್ತೆ ಅಗಲುವರು:—ಆದ್ದರಿಂದ ನಾನೂ ಅವಳ ವಿಯೋಗಕ್ಕಾಗಿ ದುಃಖಪಡಬಾರದು. ಹೀಗೆಂದು ಮಾಸ್ತರನು ತನ್ನ ಮನಸಿನ ಸಮಾಧಾನ ಮಾಡಿಕೊಂಡನು.

ಆದರೆ ಏನೂ ಅರಿಯದ ಆ ಬಾಲಿಕೆಗೆ-ಸುಶೀಲೆಗೆ—ತತ್ವಜ್ಞಾನದ ಗಂಧವೂ ಕೂಡವಿದ್ದಿರಲಿಲ್ಲವಾದುದರಿಂದ ಶೋಕಾಗ್ರಸ್ತಳಾದ ಅವಳು ತನ್ನ ಮನಸನ್ನು ಸಮಾಧಾನಪಡಿಸಲು ಅಶಕ್ತಳಾದಳು. ಆದ್ದರಿಂದ ತನ್ನ ಅಣ್ಣ-ಪೋಸ್ಟಮಾಸ್ತರನು ಇನ್ನೂ ತಿರುಗಿ ಬಂದು ತನಗೆ ಭೆಟ್ಟಿಯಾಗಬಹುದು ಕರೆದುಕೊಂಡು ಹೋಗಬಹುದು ಎಂಬ ಭ್ರಾಮಕ ಕಲ್ಪನೆಯು ಅವಳನ್ನು ಬಿಟ್ಟಿರಲಿಲ್ಲ. ಅಂತೇ ಅವಳು ಅಲ್ಲಿಂದ-ಆ ಹಳ್ಳಿಯಿಂದ-ಬೇರೆ ಕಡೆಗೆ ಹೋಗಲಾರದೆ ಆ ಪೋಷ್ಟಾಫಿಸಿನ ನೆರೆಯಲ್ಲಿಯೇ ಮೇಲಿಂದ ಮೇಲೆ ಸುತ್ತುವರಿಯುತ್ತಿದ್ದಳು.

ಮನುಷ್ಯನ ಜೀವವು ಎಷ್ಟು ಹುಚ್ಚಿರುವದು !

( ಇದು ಕವಿಶ್ರೇಷ್ಠ ಟಾಗೋರರವರ The Postmaster ಎಂಬ ಕತೆಯ ಅನುವಾದ. )

---

# ಕಾಲಗತಿ.



ಸರ್ಪಗ್ರಾಮದಲ್ಲಿ ಇಂದು ಒಳ್ಳೇ ಉತ್ಸಾಹ! ಬೀದಿ ಬೀದಿಗಳಲ್ಲಿ ನಿಲ್ಲಿಸಿದ ಮಂಡಪಗಳು, ಎತ್ತ ನೋಡಿದತ್ತ ಗುಡಿತೋರಣಗಳು, ಚಿತ್ರವಿಚಿತ್ರ ಬಣ್ಣದ ಕಾಗದಗಳಲ್ಲಿ ಬಲು ಜಾಣತನದಿಂದ ಕತ್ತರಿಸಿಗೆಯ್ದ ಹೂಮಾಲೆಗಳು, ಬಹು ಮನೋಹರವಾಗಿ ಶೋಭಿಸುತ್ತಿರುವವು. ರಾಜಕರ್ಮಚಾರಿಗಳ ಓಡಾಟ! ಆಳುಗಳ ಪೀಕಲಾಟ! ಪ್ರೇಕ್ಷಕರ ಕಲಕಲಾಟ! ಮೋಟಾರುಕಾರುಗಳ ಅಲೆದಾಟ! ಇವೇ ಮೊದಲಾದವುಗಳಿಂದ ಸರ್ಪಗ್ರಾಮದ ಮುಖ್ಯ ಬೀದಿಗಳೆಲ್ಲ ಕಿಕ್ಕಿರಿದು ಹೋಗಿವೆ. ಅಲ್ಲಿಯ ಸ್ಥಾನಿಕ ಸ್ವರಾಜ್ಯದ ಆಡಳಿತೆಗಾರರಲ್ಲಿ ಹಿಂದೆ ಎಂದೂ ಇಲ್ಲದ ಚಟುವಟಿಕೆಯು ಇಂದು ಮೂರ್ತಿಗೊಂಡು ಕಾಣುತ್ತಿದೆ. ಬೀದಿಗಳಲ್ಲಿ ಎಷ್ಟೋ ದಿನಗಳಿಂದ ಕೂಡಿ ಬಿದ್ದ ಕಸ-ಕಾಜು-ಚೂರು-ಮಲ-ಮೊದಲಾದವುಗಳನ್ನು ಬಳಿಯುವದು, ಬೀದಿಗಳ ಅಕ್ಕಪಕ್ಕಗಳಲ್ಲಿ ಅವ್ಯವಸ್ಥಿತವಾಗಿ ಬೆಳೆದ ಹುಲ್ಲು-ಕರಿಕೆಗಳನ್ನು ಕಿತ್ತಿತೆಗೆಯುವದು ಕಾಲುವೆಗಳಲ್ಲಿ ಬಹು ಕಾಲ ಮಲೆತು ನಿಂತು, ಕೊಳೆತು ಅಸಹ್ಯವಾಗಿ ನಾರುತ್ತಿದ್ದ, ಗುಂಗಾಡಗಳಿಗೆ ತವರು ಮನೆಯಾಗಿ ಮಲೇರಿಯಾ ರೋಗಕ್ಕೆ ಪ್ರಿಯಪಾತ್ರವೆನಿಸಿದ ಕೊಳೆನೀರನ್ನು ತುಂಬಿ ಹೊರಚಲ್ಲುವದು, ಇವೇ ಮುಂತಾದ ಕಾರ್ಯ ಕಲಾಪಗಳು ಬಲು ಎಚ್ಚರದಿಂದಲೂ, ಲಗುಬಗೆಯಿಂದಲೂ ನಡೆದಿದ್ದವು.

ಓದುಗರೇ, ಇದೆಲ್ಲ ಸಮಾರಂಭ ಏಕೆಂಬುದು ನಿಮಗೆ ಗೊತ್ತಿದೆಯೋ? “ಇಲ್ಲ” ವೆನ್ನುವಿರಾ? ಹಾಗಾದರೆ ನಮ್ಮೊಡನೆ ಬನ್ನಿರಿ! ಏನೆನ್ನುವಿರಿ? “ಎದುರಿಗಿನ ಗೋಡೆಗೆ ಅದೇನೊ ದೊಡ್ಡ ಕಾಗದ ಅಂಟಿಸಿರುವರೆಂದು?” ಹಾಗಾದರೆ ಅಲ್ಲಿಗೆ ಹೋಗಬೇಡಿರಿ. ಏಕೆಂದರೆ ಇದು ನೋಡಿ; ಇದೀಗ ದೇಶದಲ್ಲೆಲ್ಲ ನಡೆದಿರುವದು ಸ್ವಾತಂತ್ರ್ಯ

ಸಂಗ್ರಾಮ! ಆಳರಸರೊಡನೆ ಅಸಹಕಾರ, ಕಾಯಿದೆಭಂಗಗಳ ಯುದ್ಧ! ಕ್ರಾಂತಿಕಾರರ ಕ್ರಾಂತಿಯುತ ಭೀಕರ ಅತ್ಯಾಚಾರಗಳ ಸುಗ್ಗಿ!! ಎಲ್ಲೆಲ್ಲಿಯೂ ರಾಜದಂಡಕರ್ಮಚಾರಿ-ಗುಪ್ತಕರ್ಮಚಾರಿಗಳ ಸುಳಿ ದಾಟೆ! ಹೀಗಿರಲು ಅಲ್ಲಿ ನೀವು ಹೋದುದಾದರೆ ನಿಮ್ಮನ್ನು ಬಂಧಿಸದೆ ಬಿಡುವರೆ? ಆ ಕಾಗದವು ಎಂತಹದೊ ಆರಿಗೆ ಗೊತ್ತು; ಚಳವಳಿಕಾರರ ಪ್ರಕಟಣಾಪತ್ರ (ಬುಲೆಟಿನ್) ಗಿತ್ರ ಇದ್ದೀತು.

"ಜನರು ಗುಂಪುಗುಂಪಾಗಿ ಅದನ್ನು ಓದುತ್ತಿರುವರಲ್ಲ! ಎನ್ನುವಿರಾ?" ಹಾಗಾದರೆ ನೀವೂ ಬಲು ಎಚ್ಚರದಿಂದ ಅಲ್ಲಿಗೆ ಹೋಗಿ ದೂರ ನಿಂತು ಅರಿತೂ ಅರಿಯದಂತೆ ಓದಿಬನ್ನಿ! "ಇದೇನು ನೀವು; ಆ ಕಾಗದವನ್ನೆ, ಕಿತ್ತು ತಂದಿದಲ್ಲ. ಯಾರಾದರೂ ಕರ್ಮಚಾರಿಗಳು ನೋಡಿದಲ್ಲಿ ನಿಮಗೆ ಖಂಡಿತ ದಂಡನೆಯಾದೀತಲ್ಲವೆ? ಎಂಥ ತುಂಟರಪ್ಪಾ ನೀವು!!" ಇರಲಿ, ಅದರಲ್ಲಿ ಏನು ಇರುವದೋ ಅದನ್ನಷ್ಟು ಓದಿ ನೋಡುವಾ!

**ಈಹೊತ್ತು ಸಂಜೆಯ ನಾಲ್ಕುಗಂಟೆಗೆ ಇಲ್ಲಿ ದೊಡ್ಡ ಲಾಟ (ಗವ್ಹರ್ನರಜನರಲ್) ಸಾಹೇಬರು ಬರುವವರಿದ್ದಾರೆ. ಆಗ ಇಲ್ಲಿಯ ಸ್ಥಾನಿಕ ಸ್ವರಾಜ್ಯ, ಲೋಕಲಬೋರ್ಡ, ಮುಂತಾದ ಪ್ರಮುಖ ಸಂಸ್ಥೆಗಳಿಂದ ಅವರಿಗೆ ಮಾನಪತ್ರ ಅರ್ಪಣಾ ಸಮಾರಂಭಗಳು ನೆರವೇರಿಸಲಿವೆ. ಆದುದರಿಂದ ಈಹೊತ್ತು ಮುಂಜಾನೆ ಎಂಟು ಗಂಟೆಯಿಂದ ರಾತ್ರಿ ಎಂಟು ಗಂಟೆಯವರೆಗೆ ದೇಶೀ ಅರಿವೆಗಳನ್ನು ಧರಿಸಿಕೊಂಡು, ಐದು ಜನಕ್ಕಿಂತ ಹೆಚ್ಚಾಗದೆಯು, ಸಂಶಯ ಬರುವಂತೆಯೂ ದೇಶವಿದೇಶಗಳ ಚಟುವಟಿಕೆಗಳನ್ನು ಕುರಿತು ಚರ್ಚಿಸುತ್ತಲು, ಓಣಿಗಳಲ್ಲಿ ಯಾರೂ ಸಂಚರಿಸ ಕೂಡದು ...ಒಂದು ವೇಳೆ ಈ ಅಪ್ಪಣೆಯ ವಿರುದ್ಧ ಯಾರಾದರೂ ನಡೆದಲ್ಲಿ ಅವರಿಗೆ ತೀವ್ರದಂಡನೆ ವಿಧಿಸಲಾಗುವದು........"**

ಓಹೋ! ಹೀಗೆಯೋ? ಅಂದಲ್ಲೆ ಊರ ತುಂಬ ಈ ಗಲಾಟೆ ನಡೆದಿರುವದು. ಓದುಗರೆ, ಇನ್ನು ಇಲ್ಲಿ ನಿಂತುಕೊಂಡು ಉಪಯೋಗ

ವಿಲ್ಲ. ನಮ್ಮ ಸ್ಥಾನಿಕ ಸ್ವರಾಜ್ಯದ ಚಾವಡಿಯ ಕಡೆಗೆ ಹೋಗೋಣ! ಅಲ್ಲಿ ಏನೇನು ನಡೆದಿರುವದೋ ತಿಳಿದು ಬರುವದು.

ಸ್ಥಾನಿಕ ಸ್ವರಾಜ್ಯದ ಚಾವಡಿಯ ಮುಂದಿನ ಮಹಾದ್ವಾರವು ಒಳ್ಳೇ ಮನೋಹರವಾಗಿರುವದು. ಏಳಂತಸ್ತಿನ ಗೋಪುರವು ಎತ್ತರದಲ್ಲಿ ಮುಗಿಲನ್ನು ಮುದ್ದಿಡುವಂತೆ ಕಾಣುತ್ತಿದೆ ಚಾವಡಿಯ ಒಳಬದಿಯ ಸಭಾಮಂಟಪದ ಸಿಂಗಾರವಂತೂ ಬಣ್ಣಿಸಲಬಳವಾಗಿದೆ. ಅದನ್ನು ಅನೇಕ ಬಗೆಯ ಸಲಕರಣೆಗಳಿಂದ ಅಂದಚಂದಾಗಿ ಮಾಡಿರುವರು. ಉಚ್ಚನೀಚ ತರಗತಿಯ ಜನಗಳು ಕುಳಿತುಕೊಳ್ಳಲು ಅನೇಕ ತರದ ಆಸನಗಳು ಸಿದ್ಧವಾಗಿವೆ. ಮಧ್ಯದಲ್ಲಿ ದೊಡ್ಡ ಲಾಟಸಾಹೇಬರಿಗಾಗಿ ಒಂದು ಉಚ್ಚಾಸನವು ಸೊಬಗಾದ ಅಲಂಕಾರಗಳಿಂದ ಅಂದವಾಗಿ ಶೋಭಿಸುತ್ತಲಿದೆ. ಎಲ್ಲ ಕಡೆಗೆ ವಿದ್ಯುದ್ದೀಪಗಳನ್ನು ಹಚ್ಚುವ ಏರ್ಪಾಡು ಮಾಡಿ ವಿವಿಧ ಬಣ್ಣಗಳ ಕಾಜುಬುರುಡೆಗಳನ್ನು ಅವಕ್ಕೆ ಹೊಂದಿಸ ತೊಡಗಿದ್ದಾರೆ.

ಸುಪ್ರಸಿದ್ಧ ಇಂಜನಿಯರರಾದ ರಂಗರಾಯರು ಸ್ಥಾನದ ಮಹಾದ್ವಾರಕ್ಕೂ, ಅದರ ಗೋಪುರಕ್ಕೂ ವಿದ್ಯುದ್ದೀಪಗಳನ್ನು ತಮ್ಮ ಕೈಕೆಳಗಿನ ಜನರಿಂದ ಉಚಿತಸ್ಥಳಗಳಲ್ಲಿ ಹೊಂದಿಸತೊಡಗಿರುವರು. ಆ ದೀಪಗಳನ್ನು ಹೊಂದಿಸುವದರಲ್ಲಿಯ ಅವರ ಜಾಣ್ಮೆಯಂತೂ ಹೊಗಳುವಂತಹದು. "ದೇವರು ರಾಜರನ್ನು ರಕ್ಷಿಸಲಿ; "ಸುಸ್ವಾಗತವು" ಎಂದೂ ಇನ್ನೂ ಏನೇನೋ ಬಗೆಯಾಗಿ ಆ ವಿದ್ಯುದ್ದೀಪಗಳಿಂದ ಅಕ್ಷರಗಳನ್ನು ಹೆಣಿಸಿರುವರು.

"ಇದೆಲ್ಲವೂ ಆಯಿತು. ಆದರೆ ಗೋಪುರದ ತುದಿಯಲ್ಲಿ ಒಂದು ದೀಪವನ್ನು ಇಟ್ಟರೆ ಬಹು ಸೊಬಗಾಗುವದು ಅಲ್ಲವೇ?" ಎಂದು ರಂಗರಾಯರು ತನ್ನ ಬಳಿಯಲ್ಲಿದ್ದ ಒಬ್ಬ ತನ್ನ ಕೆಳಗಿನ (ಅಸಿಸ್ಟೆಂಟ) ಅಧಿಕಾರಿಯನ್ನು ಕೇಳಿದರು.

"ಅಹುದು. ಸೊಬಗಾಗುವದೇನೊ ನಿಜ. ಆದರೆ ಅಷ್ಟು ತುದಿಯವರೆಗೆ ಏರಿ ಮತ್ತು ಎತ್ತರವಾಗಿ ಆ ದೀಪವನ್ನು ಇಡುವವರು ಯಾರು?"

"ಅದೇನು ದೊಡ್ಡ ಮಾತು; ನಮ್ಮ ಆಳುಗಳನ್ನು ಕೇಳೋಣ; ಯಾರಾದರೂ ಚಟ್ಟನೆ ಏರಿ ಕಟ್ಟಿಬಿಡುವರು." ಎಂದು ರಂಗರಾಯರು ತಮ್ಮ ಆಳುಗಳನ್ನು ಕೇಳಿದರು. ಆವರೆಲ್ಲರೂ "ಅಲ್ಲಿಗೆ ಏರಲು, ಬಲು ತೊಂದರೆ ಅದು ನಮಗಂತೂ ಸುಲಭ ಸಾಧ್ಯವಿಲ್ಲ." ಎಂದು ಹಿಂದೆ ಗೆದರು.

"ಅಲ್ಲಿ ದೀಪವಿರಿಸುವದು. ಸಾಧ್ಯವಿಲ್ಲ! ಇರಿಸದಿದ್ದರೆ ಗೋಪುರಕ್ಕೆ ಶೋಭೆಯುಂಟಾಗುವದಿಲ್ಲ!" ಹೀಗೆಂದು ರಾಯರು ತಮ್ಮಲ್ಲಿಯೇ ಗುಣಗುಟ್ಟಿ ಕಡೆಗೆ "ಇಲ್ಲಿ ಇಷ್ಟುಜನ ನೆರೆದಿದೆ! ಮತ್ತಾರಾದರೂ ದೊರಕ ಬಹುದೆಂ" ದು ಬಗೆದು--"ಈ ಗೋಪುರದ ತುದಿಯಲ್ಲಿ ವಿದ್ಯುದ್ದೀಪವನ್ನು ಇರಿಸಬೇಕಾಗಿದೆ; ಅದಕ್ಕೆ ಯಾರಾದರೂ ಗಟ್ಟಿಗರು ಬಂದು ಆ ಕಾರ್ಯ ಮಾಡಿದಲ್ಲಿ ಅವರಿಗೆ ಯೋಗ್ಯ ಪಾರಿತೋಷಕವು ಕೊಡಲಾಗುವದು." ಎಂದು ಉಚ್ಚಸ್ವರದಿಂದ ಅಲ್ಲಿಯ ಜನರಿಗೆ ಹೇಳಿದರು. ಆದರೆ ಯಾರೂ ಬರಲಿಲ್ಲ. ರಾಯರು ಅನೇಕ ಯುಕ್ತಿ ಪ್ರಯುಕ್ತಿಗಳನ್ನೂ ಯೋಜಿಸಿ ನೋಡಿದರು. ಅವಾವವೂ ನೆಲೆಗೆ ಹತ್ತಲಿಲ್ಲ. ಹೀಗಾಗಿ ರಾಯರು ಬಹು ತೊಂದರೆಗೊಳಗಾದರು.

ಅಷ್ಟರಲ್ಲಿ ಅಲ್ಲಿಯ ಜನಗಳಲ್ಲಿಯ ಒಬ್ಬ ಗಟ್ಟಿಗನು ರಾಯರೆದುರಿಗೆ ಬಂದು ಅವರಿಗೆ ನಮಸ್ಕಾರ ಮಾಡಿ--"ರಾಯರೆ, ನಾನು ಆ ಕೆಲಸವನ್ನು ಮಾಡುವೆನು ಅಪ್ಪಣೆಯಾಗಲಿ" ಎಂದನು. ಅದನ್ನು ಕೇಳುತ್ತಲೆ, ರಾಯರ ಮುಖವು ಸ್ಫುಲ್ಲಿತವಾಯಿತು. ಕೂಡಲೆ ಅವರು ಅವನ ಬೆನ್ನು ಚಪ್ಪರಿಸಿ ತಮ್ಮ ಒಪ್ಪಿಗೆಯಿತ್ತರು. ಕೂಡಿದ ಜನರು--"ಈ ಕೆಲಸ ನಿನಗೆ ಸಾಧ್ಯವಲ್ಲ. ಜೀವದ ಮೇಲಿನ ಪ್ರಸಂಗ ಬೇಡ! ಬೇಡ!" ವೆಂದು ಹೇಳಿದರೂ ಅವನು ಕೇಳಲಿಲ್ಲ.

ಈ ಸಾಹಸಕ್ಕೆ ತೊಡಗಿದವನ ಹೆಸರು ವೆಂಕಟ. ಅವನು ಆ ಗೋಪುರವನ್ನು ಭರಭರನೆ ಏರಿದನು. ಬಲುಸಾವಧಾನದಿಂದ ರಾಯರು ಹೇಳಿದ ಸ್ಥಳದಲ್ಲಿ ನಿಂತು ತನ್ನ ತೂಕವನ್ನು ಸರಿಪಡಿಸಿಕೊಳ್ಳುತ್ತ ಉಚಿತ ಸ್ಥಳದಲ್ಲಿ ವಿದ್ಯುದ್ದೀಪವನ್ನು ಒಸ್ತಿ ತೊಡಕಿಸಿದನು. ರಾಯರೂ, ಅಲ್ಲಿ

ರುವವರೆಲ್ಲರೂ, ಅವನ ಆ ಸಾಹಸವನ್ನು ಮನವಾರೆ ಹೊಗಳ ತೊಡಗಿದರು.

ಆದರೆ ವೆಂಕನ ದುರ್ದೈವವು ಅಂದು, ಅವನಿಗಿಂತಲೂ ಮೊದಲು ಕಾಯುತ್ತಲಿತ್ತೆಂಬಂತೆ ಕಾಣುತ್ತದೆ. ಅವನು ಇನ್ನು ಕೆಳಗೆ ಇಳಿದು ಬರತೊಡಗುವವನು ಅಷ್ಟರಲ್ಲಿ ಅವನ ತೂಕವು ಆನಂದದ ಉಬ್ಬಿನಲ್ಲಿಯೋ ಏನೊ ಸರಿಯಾಗದೆ ಜೋಲಿ ಹೋಗಿ ಕೆಳಗೆ ದೊಪ್ಪನೆ ಬಿದ್ದುಬಿಟ್ಟನು.

ಆಯಿತು. ಜನರು ಅವನ ಸುತ್ತಲೂ ನೆರೆದರು. ಕೆಲವರು ಗಾಳಿ ಹಾಕಹತ್ತಿದರು. ಕೆಲವರು ತಲೆಗೆ ನೀರು ಬಡಿದರು, ಕೆಲವರು ಕಾಲು ಕೈಗಳನ್ನು ತಿಕ್ಕತೊಡಗಿದರು. ಆದರೆ ಅವರ ಆ ಎಲ್ಲ ಯತ್ನಗಳೂ ವ್ಯರ್ಥವಾದವು. ವೆಂಕನ ಬಾಯಿಂದ ರಕ್ತ ಗ್ರಂಥಿಯೊಂದು ಹೊರ ಬಿದ್ದಿತು. ವೆಂಕನ ಪ್ರಾಣ ಜ್ಯೋತಿಯು ಹಾರಿಹೋಯಿತು. ಜನರಲ್ಲಿ ಗಲಭೆಯೆದ್ದಿತು. ಕೆಲವರು ವೆಂಕನಿಗೂ, ಕೆಲವರು ರಾಯರಿಗೂ ದೋಷಕೊಡಹತ್ತಿದರು.

ವೆಂಕನ ಮನೆಯವರಿಗೆ ಈ ವಾರ್ತೆಯನ್ನು ತಿಳಿಸಲಾಯಿತು. ಅವರೂ ಶೋಕಿಸಿದರು. ರಂಗರಾಯರಿಗೂ ವ್ಯಸನವಾಯಿತು.

ಆದರೇನು? ಯಾವ ಕಾರ್ಯವಾದರೂ ತಡೆದು ನಿಲ್ಲುವದೇ? ಲೋಕ ರೂಢಿಯಂತೆ ವೆಂಕಟನ ಮುಂದಿನ ವಿಧಿಯೂ ಮುಗಿದು ಹೋಯಿತು.

ಸಂಧ್ಯಾಕಾಲದಲ್ಲಿ ಗೋಪುರದ ತುದಿಯಲ್ಲಿ ವೆಂಕಟನು ತನ್ನ ಪ್ರಾಣವನ್ನು ಬಲಿಕೊಟ್ಟು ನಿಲ್ಲಿಸಿದ ಆ ವಿದ್ಯುದ್ದೀಪವು ಹತ್ತಿಕೊಂಡು ತನ್ನ ಪ್ರಕಾಶವನ್ನು ಸುತ್ತಲೂ, ಬೀರುತ್ತ ಅಂದವಾಗಿ ಜನಕ್ಕೂ ಅಧಿಕಾರಿಗಳಿಗೂ, ಸಾನಂದಾಶ್ಚರ್ಯಗೊಳಿಸುತ್ತಲಿತ್ತು. ಆದರೆ ಆ ವೆಂಕಟನು ಈ ಆನಂದಾಶ್ಚರ್ಯಗಳಿಗೆ ಕಾರಣನಾದವನು ಈಗೆಲ್ಲಿ? ಅವನನ್ನೇ ನಂಬಿ ಬಾಳುತ್ತಿದ್ದ ಅವನ ಮನೆ ಜನರ ಗತಿಯೇನು?

ಗೊತ್ತಾದ ಪ್ರಕಾರ ಲಾಟಸಾಹೇಬರು ಬಂದರು. ವಿಧಿವಿಧಾನಗಳೆಲ್ಲವು ಮುಗಿದುವು. ಗೋಪುರದ ತುದಿಯಲ್ಲಿಯ ವಿದ್ಯುದ್ದೀಪವನ್ನು ಕಂಡು ಸಾಹೇಬರು ಸಂತೋಷಭರಿತರಾಗಿ ಇಂಜನಿಯರ-ರಂಗರಾಯರ

ಜಾಣತನವನ್ನು ಹೊಗಳಿದರು. ಉಳಿದ ಅಧಿಕಾರಿಗಳೂ, ಸಭ್ಯಗೃಹಸ್ಥರೂ ಲಾಟಸಾಹೇಬರ ಆ ಮತಕ್ಕೆ ತಮ್ಮನ್ನೂ ಸ್ವರಗೂಡಿಸಿದರು. ಲಾಟಸಾಹೇಬರು ಅದೇ ದಿನ ರಾತ್ರಿಯಲ್ಲಿ ಪೇಣಾಪುರಕ್ಕೆ ಹೋಗಿಬಿಟ್ಟರು. ಆದರೆ ಈ ಮಾನಕ್ಕೆಲ್ಲವೂ ಯೋಗ್ಯನಾದ ಆ ವೆಂಕಟನೆಲ್ಲಿ? ಅವನನ್ನು ಹೊಗಳುವವರಾರು?

ಮರುದಿನಮುಂಜಾನೆ ಲಾಟಸಾಹೇಬರ ಆಗಮನ ಕಾಲಕ್ಕೆ ಯೋಗ್ಯರೀತಿಯಿಂದ ದುಡಿದು ಆ ಸಮಾರಂಭಕ್ಕೆ ಅಂದಚೆಂದಗಳನ್ನು ಉಂಟುಮಾಡಿದ ಎಲ್ಲ ಜನರಿಗೆ, ಬಿರುದು-ಬಿಲ್ಲೆಗಳನ್ನು ಹಂಚುವ ಸಮಾರಂಭ! ಸ್ಥಾನಿಕಸ್ವರಾಜ್ಯದ ಅಧ್ಯಕ್ಷರು ತಮ್ಮ ಕರ್ಮಚಾರಿಗಳಿಗೆ ಅವರವರ ಕಾರ್ಯಕಲಾಪಗಳನ್ನು ಹೊಗಳಿ ಯಾರಿಗೆ ಬಿರುದುಗಳನ್ನು, ಯಾರಿಗೆ ಬಿಲ್ಲೆಗಳನ್ನು, ಯಾರಿಗೆ ಸಂಬಳದಲ್ಲಿ ಬೆಳಿಕೆಯನ್ನು ಕೊಟ್ಟರು. ಅವರಂತೆ ಇಂಜನಿಯರ ರಂಗರಾಯರಿಗೂ ವಿದ್ಯುದ್ದೀಪವಿರಿಸುವದರಲ್ಲಿ ಅವರು ತೋರಿದ ಜಾಣ್ಮೆಯನ್ನೂ ವಿಶೇಷವಾಗಿ ಹೊಗಳಿ ಅವರಿಗೆ ೧೦೦ ರೂಪಾಯಿಗಳ ಉಚಿತವನ್ನು, ಸಂಬಳದಲ್ಲಿ ೨೫ ರೂಪಾಯಿಗಳ ಬೆಳಿಕೆಯನ್ನೂ ಅಲ್ಲದೆ ಒಂದು ಬಂಗಾರದ ಬಿಲ್ಲೆಯನ್ನೂ ಕೊಟ್ಟರು. ಹೆರವರ ಮನೆಯ ಮೇಲೆ ತುಲಸೀಪತ್ರವಿಡಲಿಕ್ಕೆ ಯಾರ ಗಂಟೇನು ಹೋಗುವದು?

ಆದರೆ ಆ ಬಡವೆಂಕಟನ ಪಾರಿತೋಷವೆಲ್ಲಿ? ಅವನ ಹೆಂಡಿರುಮಕ್ಕಳ ವಿಚಾರವೇನು? ಅವನ ಚಿರವಿರಹದಿಂದಾದ ಅವರ ಶೋಚನೀಯ ಪರಿಸ್ಥಿತಿಯೇನು? ಇವುಗಳ ಕಡೆಗೆ ಕಣ್ದೆರೆದು ನೋಡುವವರಾದರೂ ಯಾರು? ಪಾಪ! ವೆಂಕಟನು ತಾನು ನಿಲ್ಲಿಸಿದ ದೀಪದ ಅಂದಚೆಂದಗಳನ್ನು ನೋಡಿ ಆನಂದಗೊಳ್ಳುವದಕ್ಕಿಂತ ಮೊದಲೇ ಹೋಗಿಬಿಟ್ಟಿದ್ದನು. ಜನರು ಮಾತ್ರ ಒಳಗೊಳಗೆ ವೆಂಕಟನ ಸಾಹಸನ್ನು ಹೊಗಳುತ್ತಿದ್ದರು. ಅಧಿಕಾರಿಗಳನ್ನು ತೆಗಳುತ್ತಿದ್ದರು. ಆದರೆ ಪ್ರತ್ಯಕ್ಷವಾಗಿ ಅವನ ಬಗ್ಗೆ ತಮಗೆ ಉಂಟಾಗಿದ್ದ ಕಳವಳನ್ನು ರೂಪಕ್ಕೆ ತರಲು ಯತ್ನಿಸುವವರಾರು? ವಾಚಕರೆ, ಇಂತಹ ಜನತೆಯ ಲಕ್ಷಣವನ್ನು ಪರಿಶೀಲಿಸಿಯೇ ಮೊದಲಿನವರು ಯಾರೋ, "ಬೆಕ್ಕಿನ ಕೊರಳಿಗೆ ಗಂಟೆ ಕಟ್ಟು

ವವರಾರು?" "ಯಾರ ಹೊಟ್ಟೆಕಡಿದರೆ ಯಾರು ಅಜಿವಾನ ತಿನ್ನಬೇಕು"?

ಎಂದು ಮುಂಚಾಗಿ 'ಗಾದೆ' ಗಳನ್ನು ಮಾಡಿರುವರೆಂದು ಅನ್ನು ವಿರಲ್ಲವೇ ನೀವು? ಅದೂ ನಿಜ. ನೋಡಿ!

ಕೇವಲ ಸ್ವಸುಖದಲ್ಲಿಯೇ ಮಗ್ನವಾದ ಈ ಜಗತ್ತಿನಲ್ಲಿ-ಕುರುಡ ಜಗತ್ತಿನಲ್ಲಿ-ಸಾಕು! ಆ ಬಡ ವೆಂಕಟನನ್ನು ಅವನ ಅಗಲುವಿಕೆಯಿಂದ ಪರಿತಾಪಗೊಂಡ ಅವನ ನಿಕಟಸಂಬಂಧಿಕರಲ್ಲದೆ ಇನ್ನಾರು ನೆನೆಯು ಸುವರು?

ಓದುಗರೇ, ನಡೆಯಿರಿನ್ನು ಮತ್ತೊಮ್ಮೆ ಬರೋಣವಂತೆ!

ಕಾಲಾಯ ತಸ್ಮೈ: ನಮ:। ಕಾಲಾಯ ತಸ್ಮೈ: ನಮ:!!

---

# ೨ನೇ ವರುಷದಿಂದ ಹೊಸ ಏರ್ಪಾಡು!

ಅಖಿಲ ಕನ್ನಡ ನಾಡಿನಲ್ಲಿ ಒಂದೇ ಒಂದಾದ ಪಂಡಿತ ಪಾಮರದಿಂದ ಹೊಗಳಲ್ಪಟ್ಟ.

# ಒಂದಾಣೆ ಮಾಲೆ.

**ಪ್ರತಿತಿಂಗಳ ಮೊದಲನೇ ವಾರದಲ್ಲಿ ಪ್ರಸಿದ್ಧವಾಗುವದು.**

ವರ್ಷಾರಂಭ ಜೂನ. ವರ್ಷದಲ್ಲಿ ೧೨ ಕತೆಗಳು ಹಾಗೂ ವರ್ಷಾಂತ್ಯಕ್ಕೆ ೧ ಕತೆ ಉಚಿತ.

**ವಾ ಚಂದಾ ಮುಂಗಡ** ೧-೪-೦ ಅ. ವೆ. ಸೇರಿ.

**ಪೋಷಕರಿಗೆ** ೫ ರೂ. **ಸಹಾಯಕರಿಗೆ** ೧೦ ರೂ.

**ಆಜೀವ ಚಂದಾದಾರರಿಗೆ** ೨೫ ರೂ.

ಮಾದರಿ ಸಂಚಿಕೆ ಬೇಡುವವರು ೨ ಆಣೆಯ ಅಂಚೆಯ ತಿಕೀಟು ಕಳಿಸಬೇಕು.

**ಜಾಹೀರಾತುಗಾರರಿಗೆ ಒಳ್ಳೇ ಸೌಕರ್ಯ.**

ವ್ಯಾಪಾರಸ್ಥರೆ ನಿಮ್ಮ ಜಾಹಿರಾತು ಕೊಟ್ಟು ಲಾಭಪಡೆಯಿರಿ. ದರಗಳು ಸುಲಭ! ಅಖಿಲ ಕನ್ನಡ ನಾಡಿನಲ್ಲಿ ಈ ಮಾಲೆಯ ಪ್ರಸಾರ ವಾಗಿದೆ. ಬೇಗನೇ ಜಾಹೀರಾತು ಕೊಡಿರಿ!

ಕಾರ್ಯದರ್ಶಿ,

**ಕರ್ನಾಟಕ ಸಾಹಿತ್ಯ ಸೇವಾಮಂಡಲ ಬೆಳಗಾವಿ.**